**ಕಲಿಕಾ ಸಂಸ್ಕೃತಿ ಶಿಕ್ಷಣಕ್ಕೆ ಮರಳಿ ಹೆಜ್ಜೆ**

**-ಶ್ರೀಕಾಂತ ಶ್ರೀಧರನ್**

'ಶಿಕ್ಷಣವನ್ನು ಕೇವಲ ಭಾಗಶಃ ಮಾತ್ರ ಡಿಜಿಟಲೀಕರಣ ಮಾಡಬಹುದು' -ಇದು ಕೋವಿಡ್-19 ತಂದೊಡ್ಡಿದ ಪರಿಸ್ಥಿತಿಯಲ್ಲಿ ನಮ್ಮ ಅರಿವಿಗೆ ಬಂದ ಸಂಗತಿ. ಖಾಸಗಿ ಶಾಲೆಗಳು ಮಾತ್ರ ತಮ್ಮ ಇರುವಿಕೆಯನ್ನು ಮತ್ತು ಕಲಿಕೆಯ ಕೆಲವು ಸ್ವರೂಪಗಳನ್ನು ಕಾಯ್ದುಕೊಂಡವು. ಅದು ಅವುಗಳಿಗೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಅನಿವಾರ್ಯವಾಗಿತ್ತು. ಈ ಮಧ್ಯೆ ಸರ್ಕಾರಿ ಶಾಲಾ ವಿದ್ಯಾರ್ಥಿಗಳ ಮೇಲೆ ನಡೆಸಲಾದ ಬೃಹತ್ ಸಮೀಕ್ಷೆಯಿಂದ ನಮಗೆ ತಿಳಿದುಬಂದ ವಿಚಾರವೆಂದರೆ, ಶೇ.೮೦ ರಿಂದ ೯೦ರಷ್ಟು ಮಕ್ಕಳು ಗಣಿತ ಮತ್ತು ಭಾಷಾ ವಿಷಯ ಎರಡರಲ್ಲೂ ಹಿಂದಿನ ವರ್ಷ ಗಳಿಸಿದ ಕನಿಷ್ಠ ಒಂದು ಸಾಮರ್ಥ್ಯವನ್ನು ಕಳೆದುಕೊಂಡಿದ್ದಾರೆ. ವಿದ್ಯಾರ್ಥಿಗಳಲ್ಲಿ ಕಂಡುಬಂದ ಈ ಎರಡೂ ವಿಷಯಗಳಲ್ಲಿನ ನಿರ್ದಿಷ್ಟ ಸಾಮರ್ಥ್ಯಗಳ ನಷ್ಟ ಶೇ.20 ರಿಂದ ೯೦ರಷ್ಟು. ಇದನ್ನು ಕಲಿಕಾ ನಷ್ಟದ ತಿಂಗಳುಗಳಿಗೆ ನಿಖರವಾಗಿ ಪರಿವರ್ತಿಸಲು ಕಷ್ಟವಾದರೂ ಕೂಡ ಇದು ಶಾಲೆಗಳು ಮುಚ್ಚಿರುವ ತಿಂಗಳುಗಳ ಸಂದರ್ಭದಲ್ಲಿಯೇ ಆಗಿದೆ ಎನ್ನುವುದು ಬಹುತೇಕ ಸ್ಪಷ್ಟ. ಹಾಗೆ ಶಾಲೆಗಳು ಮುಚ್ಚಿದ ತಿಂಗಳುಗಳ ಸಂಖ್ಯೆ ಈ ಲೇಖನವನ್ನು ಬರೆಯುವ ಹೊತ್ತಿಗೆ ಸರಿಸುಮಾರು ಹದಿನೆಂಟು ತಿಂಗಳುಗಳು. ಇದಕ್ಕೆ ಇನ್ನಷ್ಟು ನಿಖರತೆಯನ್ನು ಕೊಡುವುದಾದರೆ ಅಮೆರಿಕದಲ್ಲಿ ನಡೆಸಲಾದ ಅಧ್ಯಯನದ ಪ್ರಕಾರ ಕೋವಿಡ್-19 ಕಾರಣದಿಂದ (ಭಾರತಕ್ಕೆ ಹೋಲಿಸಿದರೆ ಅಮೆರಿಕದಲ್ಲಿ ಶಾಲೆಗಳನ್ನು ಮುಚ್ಚಿದ ಅವಧಿ ಬಹಳ ಕಡಿಮೆ) ಮಕ್ಕಳು ಶೈಕ್ಷಣಿಕವಾಗಿ 4ರಿಂದ 5 ತಿಂಗಳು ಹಿನ್ನಡೆಯನ್ನು ಅನುಭವಿಸಿದ್ದಾರೆ.

ಇಂತಹ ವಿದ್ಯಮಾನಗಳಲ್ಲಿ 'ತುರ್ತು ಯೋಜನೆ' ಅಥವಾ ಪರ್ಯಾಯ ಯೋಜನೆ (ಪ್ಲಾನ್-ಬಿ) ಕೈಗೊಳ್ಳುವುದು ಉದ್ಯಮ ಅಥವಾ ವ್ಯಾಪಾರದ ವಿಚಾರದಲ್ಲಿ ಸಾಮಾನ್ಯ ಸಂಗತಿ. ಆದರೆ ಶಿಕ್ಷಣದ ಜಗತ್ತಿನಲ್ಲಿ ಇದರ ಬಗ್ಗೆ ಸಾಕಷ್ಟು ಅರಿವಿಲ್ಲ. 2020ರ ಕೊನೆಯ ಭಾಗದಲ್ಲಿ ಅನೇಕ ಬಾರಿ ಶಾಲೆಗಳನ್ನು ತೆರೆಯುವ ಬಗ್ಗೆ ಯೋಜನೆ ರೂಪಿಸುತ್ತಿದ್ದಾಗ ಈಗ ಅಸ್ತಿತ್ವದಲ್ಲಿರುವ ಯೋಜನೆಯನ್ನು ಮೊಟಕುಗೊಳಿಸುವ ವಿಧಾನ ಕೂಡ ಕೇಳಿಬಂದಿತ್ತು. ಬಾಕಿ ಉಳಿದಿರುವ ಸಮಯದಲ್ಲಿ ಪೂರ್ಣಗೊಳಿಸಲು ಸಾಧ್ಯವಾಗುವಂತೆ ಕೆಲವು ಅಧ್ಯಾಯಗಳನ್ನು ಕಡಿತಗೊಳಿಸುವುದು ಕೂಡ ಇದರಲ್ಲಿ ಸೇರಿತ್ತು. ಆದರೆ, 2020-21ರ ಶೈಕ್ಷಣಿಕ ವರ್ಷ ಕೊನೆಗೊಂಡಾಗ ಅದನ್ನೂ ಕೂಡ ಜಾರಿಗೆ ತರಲು ಸಾಧ್ಯವಾಗಿರಲಿಲ್ಲ. 2021-22ರ ಶೈಕ್ಷಣಿಕ ವರ್ಷದ ಬಹುತೇಕ ಭಾಗ ಮುಗಿದು ಹೋಗಿರುವ ಕಾರಣ ಹಳೆಯದನ್ನೇ ಚೆಗುಟುವುದಕ್ಕಿಂತ ನಮಗೆ ವಿಭಿನ್ನವಾದ ಯೋಜನೆಯ ಅಗತ್ಯವಿದೆ.

ಭಾರತದಲ್ಲಿ ವಿದ್ಯಾರ್ಥಿಗಳು ಸರ್ಕಾರಿ ಶಾಲೆಗಳಿಗೆ ಮರಳುವ ಬಗ್ಗೆ ಈ ಲೇಖನದಲ್ಲಿ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ ಅದರಲ್ಲೂ ಮುಖ್ಯವಾಗಿ ಪ್ರಾಥಮಿಕ ಶಾಲೆಗಳ ವಿಚಾರದಲ್ಲಿ ಹೆಚ್ಚಿನ ಒತ್ತು ನೀಡಲಾಗಿದೆ.

**ಕಲಿಯುವ ಸಂಸ್ಕೃತಿಯ ನಷ್ಟ**

ಮನೆಯಲ್ಲಿ ಯಾವುದೇ ಪೂರಕ ಕಲಿಕಾ ಪ್ರಕ್ರಿಯೆಯೂ ಇಲ್ಲದೆ ಇಷ್ಟೊಂದು ಸುದೀರ್ಘ ಕಾಲ ಶಾಲೆಯಿಂದ ದೂರು ಉಳಿದಿರುವುದನ್ನು ಕಲಿಕಾ ನಷ್ಟ ಎಂದು ಕರೆಯದೇ ಬೇರೆ ವಿಧಿಯಿಲ್ಲ. ಶಾಲೆಗೆ ವಿದ್ಯಾರ್ಥಿಗಳನ್ನು ಮತ್ತೆ ಆಹ್ವಾನಿಸುವ ಈ ಪ್ರವೃತ್ತಿ ಕಲಿಕಾ ಸಂಸ್ಕೃತಿಯ ನಷ್ಟ. ಸರ್ಕಾರಿ ಶಾಲೆಗಳಲ್ಲಿ ಪ್ರಾಥಮಿಕ ತರಗತಿಯ ವಿದ್ಯಾರ್ಥಿಗಳ ಮಟ್ಟಿಗೆ ಹೇಳುವುದಾದರೆ ಶಾಲೆ ಮತ್ತು ಅವರ ಮನೆಗಳಲ್ಲಿನ ಕಲಿಕಾ ಸಂಸ್ಕೃತಿಯ ವಿಚಾರದಲ್ಲಿ ಬಹುದೊಡ್ಡ ಅಂತರವಿದೆ. ಮನೆಯಲ್ಲಿ ಸಾಧ್ಯವಿಲ್ಲದೇ ಇರುವ ಕಲಿಕಾ ಸಂಸ್ಕೃತಿಯ ವಿಧಾನವನ್ನು ಶಾಲೆಯು ಅನುಸರಿಸುತ್ತದೆ. ಇದು ಮಧ್ಯಮ ಅಥವಾ ಉನ್ನತ ವರ್ಗಗಳ ಮಕ್ಕಳ ವಿಚಾರದಲ್ಲಿ ಯಾವುದೇ ಸಮಸ್ಯೆ ಇಲ್ಲ.

ಹಾಗಾಗಿ ಶಾಲೆಯ ಕಲಿಕಾ ಸಂಸ್ಕೃತಿಗೆ ಮರಳುವುದೇ ನಿಜವಾದ ಸಮಸ್ಯೆ. ಇದು ಕೇವಲ ಕಲಿಕಾ ನಷ್ಟಗಳಿಗೆ ಮಾತ್ರ ಸೀಮಿತವಾದ ಸಮಸ್ಯೆಯಲ್ಲ. ಈ ಸಮಸ್ಯೆಯ ವ್ಯಾಪ್ತಿ ಇನ್ನೂ ವಿಶಾಲವಾಗಿದೆ.

**ಪರಿಹಾರ-ಹಂತ ಹಂತದ ಮರಳಿಕೆ/ಪುನರಾಗಮನ**

ಕಲಿಕಾ ಸಂಸ್ಕೃತಿಗೆ ಮತ್ತೆ ಮರಳುವ ಯೋಚನೆ ಏನಿದೆ ಅದು ಏಕಾಏಕಿ ಆಗುವಂತಹುದಲ್ಲ. ಅದು ಹಂತಹಂತವಾಗಿ ಮಾಡಬೇಕಾದ ಕೆಲಸ. ಕೆಲವು ಹಂತಗಳಲ್ಲಿ ನಮ್ಮ ಸಮೀಕರಣಕ್ಕೆ ಹೊರತಾದ ಚಟುವಟಿಕೆಗಳನ್ನು ಮಾಡಬೇಕಾಗುತ್ತದೆ.

ಇಂತಹ ವಿಚಾರದಲ್ಲಿ ಒಂದು ಬಿಗಿಯಾದ ಕ್ರಿಯಾ ಯೋಜನೆಗೆ ಬದಲಾಗಿ ಸಲಹೆಗಳು ಮತ್ತು ಯೋಚನೆಗಳ ಪಟ್ಟಿಯನ್ನು ಸಿದ್ಧಪಡಿಸುವುದು ಉತ್ತಮ. ಯಾಕೆಂದರೆ ಪ್ರತಿಯೊಂದು ರಾಜ್ಯದ ವಿನ್ಯಾಸ ಅಲ್ಲಿನ ಸ್ಥಳೀಯ ವಿಷಯಗಳಿಗೆ ತಕ್ಕುನಾಗಿರುತ್ತದೆ. ಕೇವಲ ಒಂದು ನಿರ್ದಿಷ್ಟವಾದ ಯೋಜನೆ ಕೇವಲ ಒಂದು ಸನ್ನಿವೇಶಕ್ಕೆ ಮಾತ್ರ ಸರಿಹೊಂದಿಕೆಯಾಗುವ ಕಾರಣ ಒಂದು ಪಟ್ಟಿಯನ್ನು ಸಿದ್ಧಪಡಿಸಿ ಅದರಿಂದ ಯೋಚನೆಗಳನ್ನು ಆಯ್ಕೆ ಮಾಡಿಕೊಳ್ಳುವುದು ಹೆಚ್ಚು ಪ್ರಯೋಜನಕಾರಿ.

**ಹಂತ-1**

ಇಡೀ ಸನ್ನಿವೇಶದ ದೃಷ್ಟಿಕೋನದಿಂದ ನಾವು ನೋಡುವುದಾದರೆ ಶಾಲೆಗಳು ಮುಚ್ಚಿದ ಮತ್ತು ವಿದ್ಯಾರ್ಥಿಗಳು ಶಾಲೆಗೆ ಬರಲು ಅವಕಾಶ ನೀಡದ ಸಮಯದಿಂದ ಇದನ್ನು ಆರಂಭಿಸಬೇಕಾಗುತ್ತದೆ. ಅನೇಕ ರಾಜ್ಯಗಳಲ್ಲಿ 2020-21ರ ಈ ಹಂತವನ್ನು ಅನಗತ್ಯವಾಗಿ ಪೋಲು ಮಾಡಲಾಗಿದೆ. ಕಲಿಕೆಯನ್ನು ಪುನರಾರಂಭ ಮಾಡುವ ವಿಚಾರದಲ್ಲಿ ಈ ಹಂತದಲ್ಲಿ ಇನ್ನಷ್ಟು ಕೆಲಸವನ್ನು ಮಾಡಬಹುದಿತ್ತು. ಕೆಳಗಿನ ಅಂಶಗಳು ಈ ಹಂತದಲ್ಲಿ ಒಳಗೊಳ್ಳಬಹುದಿತ್ತು:

- ವರ್ಕ್-ಶೀಟ್ ಬಳಕೆ
- ಸಮುದಾಯದ ಶಿಕ್ಷಿತ ಯುವಕರಿಂದ ಸಹಾಯ.
- ಪ್ರಸಾರ ಮಾಧ್ಯಮವಾದ ಟಿವಿ ಮತ್ತು ಯೂಟ್ಯೂಬ್ ಹಾಗೂ ವಾಟ್ಸ್ಯಾಪ್ ನಂತಹ ಪ್ರಭಾವಿ ಮಾಧ್ಯಮದ ಬಳಕೆ.
- ಮೇಲಿನ ಎಲ್ಲದಕ್ಕೂ ಶಿಕ್ಷಕರಿಂದ ಬೆಂಬಲ

ಈ ಹಂತದಲ್ಲಿನ ಚಟುವಟಿಕೆಗಳನ್ನು ನಿಯಂತ್ರಿಸಲು ಸಾಧ್ಯವಿಲ್ಲದೇ ಇದ್ದ ಕಾರಣ ಈ ಯೋಚನೆ ಒಟ್ಟು ವಿದ್ಯಮಾನದ ಸಂಯೋಜನೆ ಅಥವಾ ನಿಯಂತ್ರಣ ಮಾಡಲು ಅಲ್ಲ. ಬದಲಾಗಿ, ಸ್ಥಳೀಯ ಸ್ವಯಂಸೇವಕರು ಶಿಕ್ಷಕರ ಬೆಂಬಲದೊಂದಿಗೆ ಅತ್ಯಂತ ಎಚ್ಚರಿಕೆಯಿಂದ ವಿನ್ಯಾಸಗೊಳಿಸಲಾದ ಸಂಪನ್ಮೂಲಗಳನ್ನು ಕಲ್ಪಿಸುವುದರ ಕಡೆಗೆ ಹೆಚ್ಚಿನ ಆದ್ಯತೆ ನೀಡಬೇಕು. ಈ ಲೇಖನವನ್ನು ಪ್ರಕಟ ಮಾಡುವ ಹೊತ್ತಿಗೆ ಈ ಹಂತವನ್ನೂ ನಾವು ಕಳೆದಿರಬಹುದು, ಆದರೆ ಇದು ಭವಿಷ್ಯದಲ್ಲಿನ ಬಳಕೆಗೆ ಹೆಚ್ಚು ಪ್ರಯೋಜನಕಾರಿಯಾದೀತು.

ಈ ಹಂತದಲ್ಲಿನ ಬಹುಮುಖ್ಯ ಅಂಶ ಏನೆಂದರೆ ಕ್ರಮಬದ್ಧವಾದ ಶಿಕ್ಷಣವನ್ನು ತಂತ್ರಜ್ಞಾನಗಳನ್ನು ಬಳಸಿ ಮನೆಗಳಿಗೆ ತರದಿರುವುದು ಉತ್ತಮ. ಅದಕ್ಕೆ ಬದಲಾಗಿ ವಿದ್ಯಾರ್ಥಿಗಳ ಈಗಿನ ಕಲಿಕಾ ಹಂತಗಳನ್ನು, ನಾವು ನಿಗದಿ ಮಾಡಿದ ಕಲಿಕಾ ಉದ್ದೇಶಗಳನ್ನು, ಪ್ರತಿ ಮಗುವಿಗೆ ನಿಕಟವಾದ ಈಗಿನ ಸಾಮರ್ಥ್ಯಗಳನ್ನು ಗಮನಕ್ಕೆ ತೆಗೆದುಕೊಳ್ಳಬೇಕಾದ ಅಗತ್ಯವಿದೆ ಹಾಗೂ ಪರಿಸ್ಥಿತಿಯ ನಿರ್ಬಂಧಗಳಿಗೆ ಅನುಗುಣವಾಗಿ ನಮ್ಮಿಂದಾದಷ್ಟು

ಬೋಧನೆ-ಕಲಿಕಾ ಪ್ರಕ್ರಿಯೆಯನ್ನು ಕೈಗೊಳ್ಳುವುದು. ಈ ಹಂತವನ್ನು ಸಮಗ್ರವಾಗಿ ನಿಭಾಯಿಸಲು ಇಲ್ಲಿರುವ ಐದು ವಿಷಯಗಳಲ್ಲಿ ಪ್ರತಿಯೊಂದು ಅಂಶ ಕೂಡ ಅತ್ಯಗತ್ಯವಾಗಿದೆ:

1. **ಪ್ರಸಾರ ಮಾಧ್ಯಮದ ಮೂಲಕ ತರಗತಿಗಳನ್ನು ನಡೆಸುವುದು**

ಕೇರಳ ಸರ್ಕಾರದ KITE VICTERSii *YouTube* ಚಾನಲ್ ಇದಕ್ಕೊಂದು ಉದಾಹರಣೆ. ಲಾಕ್-ಡೌನ್ ಅವಧಿಯಲ್ಲಿ ಈ ಯೂಟ್ಯೂಬ್ ಚಾನಲ್ 30 ಲಕ್ಷಕ್ಕೂ ಹೆಚ್ಚಿನ ಚಂದಾದಾರರನ್ನು ಹೊಂದಿತ್ತು. ವೇಳಾಪಟ್ಟಿಗೆ ತಕ್ಕಂತೆ ತರಗತಿ ಮತ್ತು ವಿಷಯವಾರು ನೇರ ಪ್ರಸಾರವನ್ನು ಟೀವಿಯಲ್ಲಿ ಮಾಡಲಾಗುತ್ತಿತ್ತು. ಅದನ್ನು ಆನಂತರದಲ್ಲಿಯೂ ಯೂಟ್ಯೂಬ್ ಚಾನಲ್ ನಲ್ಲಿ ವೀಕ್ಷಿಸಲು ಸಾಧ್ಯವಿತ್ತು. ಇಲ್ಲಿ ಪರಸ್ಪರ ಸಂವಹನ ನಡೆಸಲು ಸಾಧ್ಯವಾಗದೇ ಇದ್ದರೂ ಕೂಡ ಪಾಠಗಳನ್ನು ಮಾಡುವ ಮೂಲ ಹಂತದ ಕೆಲಸವನ್ನು ನಿರ್ವಹಿಸಲು ಸಾಧ್ಯವಿತ್ತು. ಟಿವಿಯಲ್ಲಿ ಮತ್ತು ಯೂಟ್ಯೂಬ್ ಚಾನಲ್ ನಲ್ಲಿ ಪಾಠಗಳನ್ನು ಮಾಡುವುದರಿಂದ ಹೆಚ್ಚು ಜನರನ್ನು ತಲುಪುವುದು ಸಾಧ್ಯವಾಗಿತ್ತು. ಸ್ಮಾರ್ಟ್ ಫೋನ್ ಗಳು ಅಥವಾ ಲ್ಯಾಪ್-ಟಾಪ್ ಗಳಲ್ಲಿ ಪಾಠಗಳನ್ನು ಕೇಳುವುದಕ್ಕೆ ಹೋಲಿಸಿದರೆ ಇದು ಮಕ್ಕಳಿಗೆ ಹೆಚ್ಚಿನ ನ್ಯಾಯವನ್ನು ಒದಗಿಸುವ ಕೆಲಸ.

2. **ಕಲಿಕಾ ಚಟುವಟಿಕೆಗಳಿಗೆ ವರ್ಕ್-ಶೀಟ್**

ಈ ಸಂದರ್ಭದಲ್ಲಿ ಅಜೀಂ ಪ್ರೇಂಜಿ ಫೌಂಡೇಶನ್ ಮತ್ತು ಇತರ ಕೆಲವು ಸಂಘ ಸಂಸ್ಥೆಗಳು ಸಿದ್ಧಪಡಿಸಿದ ವರ್ಕ್-ಶೀಟ್ ಗಳು ಇದಕ್ಕೆ ಪ್ರಮುಖ ಉದಾಹರಣೆಯಾಗಿದೆ. ಇದರ ಮುಖ್ಯ ಉದ್ದೇಶ ಏನೆಂದರೆ ನಾನಾ ತರಗತಿಗಳಿಗೆ ಸೇರಿದ ಮಕ್ಕಳು ಅಪೇಕ್ಷಿತ ಕಲಿಕಾ ಫಲಿತಾಂಶಗಳಿಗೆ ಸರಿಹೊಂದುವ ರೀತಿಯಲ್ಲಿ ವಿನ್ಯಾಸಗೊಳಿಸಲಾದ ಚಟುವಟಿಕೆಗಳನ್ನು ತಮಗೆ ಸಾಧ್ಯವಿರುವಲ್ಲೆಲ್ಲ ಮಾಡುತ್ತ ಹೋಗಬಹುದು. ಆದರೆ ಈ ವರ್ಕ್-ಶೀಟ್ಗಳು ಆಯಾ ಹಂತಗಳಿಗೆ ತಕ್ಕುನಾಗಿರಬೇಕೇ ಹೊರತು ತರಗತಿಗೆ ತಕ್ಕುನಾಗಿರಬಾರದು.

ಇದರ ಜೊತೆಗೆ ಈ ವರ್ಕ್-ಶೀಟ್ ಗಳನ್ನು ಸ್ವಯಂಸೇವಕರಿಗೂ ಕೂಡ ನಿಭಾಯಿಸಲು ಸುಲಭವಾಗಿರುವಂತೆ ರೂಪಿಸಬೇಕು. ಇವು ಶಿಕ್ಷಕರ ಕ್ಲಾಸ್-ರೂಮ್ ಚಟುವಟಿಕೆಗಳಿಗೆಗಾಗಿ ವಿನ್ಯಾಸಗೊಳಿಸಲಾದ ಮಾಮೂಲಿ ವರ್ಕ್-ಬುಕ್ ಗಳಿಗಿಂತ ಭಿನ್ನವಾಗಿರುತ್ತವೆ. ಈ ವರ್ಕ್-ಶೀಟ್ ಗಳು ಹೊಸ ಪರಿಕಲ್ಪನೆಗಳನ್ನು ಜಾರಿಗೆ ತರಲು ಸೂಕ್ತವಾದುದಲ್ಲವಾದರೂ ಕೂಡ ಅವುಗಳು ಪ್ರಸಾರ ತರಗತಿಗಳಿಗೆ ಅತ್ಯಂತ ಪೂರಕವಾಗಬಹುದು. ಇದರಿಂದ ಮಕ್ಕಳು ಕೇವಲ ಪಾಠಗಳನ್ನು ಆಲಿಸುವುದು ಮತ್ತು ವೀಕ್ಷಿಸುವುದರ ಬದಲಿಗೆ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲು ಸಹಾಯವಾಗುತ್ತದೆ. ಮಕ್ಕಳು ನಾನಾ ಸ್ಥಳಗಳಲ್ಲಿ ಇರುವ ಸಾಧ್ಯತೆಯಿರುವುದರಿಂದ ಈ ವರ್ಕ್-ಶೀಟ್ ಗಳನ್ನು ಮುದ್ರಿಸಿ ವಿತರಣೆ ಮಾಡುವುದು ಸವಾಲಿನ ಕೆಲಸ. ಉದಾಹರಣೆಗೆ ಮಕ್ಕಳು ವಲಸೆ ಕಾರ್ಮಿಕರಾಗಿದ್ದರೆ ಹಂಚಿಕೆ ದುಸ್ತರವಾಗುತ್ತದೆ.

*3.* **ಸ್ವಯಂಸೇವಕರಿಂದ ಬೆಂಬಲ**

ಈ ಹಂತದಲ್ಲಿ ಸಹಾಯ ಮಾಡಲು ಶಿಕ್ಷಕರು ಪ್ರತಿಯೊಂದು ಮಗುವಿನ ಜೊತೆಗೂ ಇರಲು ಅಸಾಧ್ಯವಾದ ಕಾರಣ ಪಾಲಕರು ಅಥವಾ ನೆರೆಹೊರೆಯ ಶಿಕ್ಷಿತ ಯುವಕರು ಅಥವಾ ಇನ್ಯಾರಾದರೂ ಮಗುವಿನ ಶಿಕ್ಷಣಕ್ಕೆ ನಿಕಟವಾಗಿ ಇರುವವರು ಈ ಕೆಲಸಕ್ಕೆ ಬೆಂಬಲ ನೀಡಬಹುದು.

ಮಾರ್ಗದರ್ಶನ ಮತ್ತು ಪ್ರೋತ್ಸಾಹದ ಸುಳಿವಿಲ್ಲದೆ ಪ್ರಾಥಮಿಕ ತರಗತಿಗಳಲ್ಲಿ ಶಿಕ್ಷಣವನ್ನು ನೀಡಲು ಸಾಧ್ಯವಿಲ್ಲ. ಇದು ರಾಷ್ಟ್ರೀಯ ಶಿಕ್ಷಣ ನೀತಿ-2020ರ ಶಿಫಾರಸುಗಳಿಗೆ ಪೂರಕವಾಗಿದೆ. "ಹೆಚ್ಚುವರಿಯಾಗಿ ಇಂತಹುದೊಂದು ಬೃಹತ್ ಪ್ರಮಾಣದ ಅಭಿಯಾನದಲ್ಲಿ ಸಹಭಾಗಿಯಾಗಲು ಸ್ಥಳೀಯ ಸಮುದಾಯ ಮತ್ತು ಅದರಾಚೆಗಿನ ತರಬೇತಿ ಹೊಂದಿದ ಎಲ್ಲ ಸ್ವಯಂ ಸೇವಕರಿಗೆ ಇದರಿಂದ ಸುಲಭವಾಗಲಿದೆ. ಸಮುದಾಯದ ಪ್ರತಿಯೊಬ್ಬ ಶಿಕ್ಷಿತ ಸದಸ್ಯ ಕೂಡ ಒಬ್ಬ ವಿದ್ಯಾರ್ಥಿ/ವ್ಯಕ್ತಿಗೆ ಹೇಗೆ ಓದುವುದು ಎಂಬುದನ್ನು ಕಲಿಸುವುದಕ್ಕೆ ಬದ್ಧವಾದರೆ ದೇಶದ ಚಿತ್ರಣ ಬಹುಬೇಗ ಬದಲಾಗುತ್ತದೆ. ಈ ನಿಟ್ಟಿನಲ್ಲಿ ಸಕ್ರಿಯ ಮತ್ತು ಆರೋಗ್ಯವಂತ ಹಿರಿಯ ನಾಗರಿಕರು, ಹಳೆಯ ವಿದ್ಯಾರ್ಥಿಗಳು ಮತ್ತು ಸ್ಥಳೀಯ ಸಮುದಾಯದ ಸದಸ್ಯರ ಬೆಂಬಲವನ್ನು ಸೂಕ್ತವಾಗಿ ಪಡೆಯುವುದು ಅಗತ್ಯ. ಇದಕ್ಕಾಗಿ ಶಿಕ್ಷಿತ ಸ್ವಯಂಸೇವಕರು, ನಿವೃತ್ತ ವಿಜ್ಞಾನಿಗಳು/ಸರ್ಕಾರ/ಅರೆ ಸರ್ಕಾರಿ ಉದ್ಯೋಗಿಗಳು, ಹಳೆಯ ವಿದ್ಯಾರ್ಥಿಗಳು ಮತ್ತು ಶಿಕ್ಷಕರ ದತ್ತಾಂಶಗಳನ್ನು ರಚಿಸಬೇಕು."

ಇಂತಹುದೊಂದು ದತ್ತಾಂಶವನ್ನು ರಚಿಸುವ ಅವಕಾಶ ಕೋವಿಡ್ ಸಂದರ್ಭದಲ್ಲಿ ಅಲ್ಲದೆ ಬೇರೆ ಯಾವಾಗ?

***4. ಶಿಕ್ಷಕರ ಪಾತ್ರ***

ವರ್ಕ್-ಶೀಟ್ ಗಳನ್ನು ವಿತರಣೆ ಮಾಡುವುದು ಮತ್ತು ಅವುಗಳನ್ನು ಪೂರ್ಣಗೊಳಿಸುವ ಇಡೀ ಪ್ರಕ್ರಿಯೆ ಸಾಧ್ಯವಾಗುವಂತೆ ಮಾಡುವಲ್ಲಿ ಶಿಕ್ಷಕರ ಪಾತ್ರ ಬಹಳ ಮುಖ್ಯವಾದುದು. ಸಮುದಾಯದ ಸಹಾಯದೊಂದಿಗೆ ಸ್ವಯಂಸೇವಕರನ್ನು ಗುರುತಿಸುವುದು ಮತ್ತು ಯೋಜನೆ, ಪರಾಮರ್ಶೆ ಮತ್ತು ಬೆಂಬಲಕ್ಕಾಗಿ ಟೆಲಿಕಾನ್ಫರೆನ್ಸ್ ಅಥವಾ ವಾಟ್ಸ್ಯಾಪ್ ಗ್ರೂಪ್ ಮೂಲಕ ಸ್ವಯಂಸೇವಕರ ಜೊತೆ ನಿರಂತರವಾಗಿ ಸಂಪರ್ಕ ಸಾಧಿಸುವುದು ಶಿಕ್ಷಕರ ಜವಾಬ್ದಾರಿಯಾಗಿರುತ್ತದೆ.

**5. ಪಠ್ಯಕ್ರಮ ರಚನಾ ಮಂಡಳಿಗಳ ಪಾತ್ರ (ಎಸ್.ಸಿ.ಇ.ಆರ್.ಟಿ.ಗಳ ಮಾದರಿಯಲ್ಲಿ).**

ಈ ಹಂತವನ್ನು ಪರ್ಯಾಯವಾಗಿ ಮುಂದಿನ ಹಂತಗಳಿಗೆ ಮಾರ್ಪಾಡು ಮಾಡಲಾದ ಪಠ್ಯಕ್ರಮವನ್ನು ವಿನ್ಯಾಸಗೊಳಿಸಲು ಬಳಸಿಕೊಳ್ಳುವುದು. ಈಗಿರುವ ಪಠ್ಯ ಪುಸ್ತಕಗಳು/ಕಾರ್ಡ್ ಗಳಿಂದ ಕೆಲವು ಭಾಗಗಳನ್ನು ಪಡೆಯುವುದಕ್ಕಿಂತ ಮುಖ್ಯವಾಗಿ ಈ ಕೆಳಗಿನ ಅಂಶಗಳನ್ನು ಅನುಸರಿಸಬಹುದು:

* ಪ್ರತಿಯೊಂದು ತರಗತಿಯ ಮಟ್ಟದ ಪ್ರಮುಖ ಕಲಿಕಾ ಫಲಿತಾಂಶಗಳನ್ನು ಮುಂದಿನ ಹಂತಕ್ಕೆ ವಿಸ್ತೃತವಾಗಿ ವಿಭಾಗಿಸುವುದು.

* ಇಡೀ ತರಗತಿ ಅಥವಾ ಗುಂಪುಗಳಿಗೆ ಅಥವಾ ವ್ಯಕ್ತಿಗಳಿಗಾಗಿ ಎಚ್ಚರಿಕೆಯಿಂದ ವಿನ್ಯಾಸಗೊಳಿಸಲಾದ ಚಟುವಟಿಕೆಗಳನ್ನು ಒಳಗೊಂಡ ಸರಣಿಗಳ ಮೂಲಕ ಇವುಗಳಿಗಾಗಿ ಒಂದು ಪಥವನ್ನು ರಚಿಸುವುದು.

* ಬಹು-ಹಂತದ ವಿದ್ಯಮಾನದ ಹಿನ್ನಲೆಯಲ್ಲಿ ಪಠ್ಯಪುಸ್ತಕ ಆಧಾರಿತ ಪಠ್ಯಕ್ರಮಕ್ಕಿಂತ ಕಾರ್ಡ್ ಆಧಾರಿತ ಪಠ್ಯಕ್ರಮವನ್ನುiii ಆಯ್ಕೆ ಮಾಡಿಕೊಳ್ಳುವುದು ಉತ್ತಮ.

**ಹಂತ-2**

ಈ ಎರಡನೇ ಹಂತವು ವಿದ್ಯಾರ್ಥಿಗಳು ಹಿನ್ನಡೆಯನ್ನು ಅನುಭವಿಸಿದ್ದರೂ ಕೂಡ 'ಶಿಕ್ಷಣವು ಎಂದಿನಂತೆ' ಇರುವ ಅವಧಿ. ಈ ಹಂತವು ಸಾಮಾನ್ಯ ಹಂತಕ್ಕೆ ಶೀಘ್ರವಾಗಿ ಮರಳುವುದಕ್ಕೆ ಹೆಚ್ಚು ಗಮನ ಕೊಡುವುದರ ಬದಲಾಗಿ ಶಿಕ್ಷಕರು, ವಿದ್ಯಾರ್ಥಿಗಳು ಮತ್ತು ಪಾಲಕರು ನಿಧಾನ ಗತಿಯಲ್ಲಿ ಸ್ಥಿರತೆಯತ್ತ ಮರಳುವುದಕ್ಕೆ ಬೇಕಾದ ಮಾನಸಿಕ ಅಂಶಗಳ ಕಡೆಗೆ ಹೆಚ್ಚಿನ ಗಮನವನ್ನು ನೀಡಬೇಕು. ಈ ಹಂತವನ್ನು ಎರಡು ಕಾರಣಗಳಿಗಾಗಿ ತರಾತುರಿಯಿಂದ ನಿರ್ವಹಿಸುವಂತಿಲ್ಲ-ಒಂದು ವೈದ್ಯಕೀಯ ಮತ್ತು ಇನ್ನೊಂದು ಶೈಕ್ಷಣಿಕ.

**ಈ ಅವಧಿಯಲ್ಲಿ ಗಮನಿಸಬೇಕಾದ ಪ್ರಮುಖ ಅಂಶಗಳು:**

- ಮೊದಲನೇ ಹಂತ ಮರುಕಳಿಸದಂತೆ ಎಚ್ಚರಿಕೆಯಿಂದ ಇರುವುದು.
- ಕಲಿಕಾ ಸಂಸ್ಕೃತಿಗೆ ಮರಳಲು ಬೇಕಾದ ಮನೋವೈಜ್ಞಾನಿಕ ಅಂಶಗಳನ್ನು ನಿಭಾಯಿಸುವುದು.

ಇದರ ಅರ್ಥ ಏನೆಂದರೆ ಈ ಉದ್ದೇಶಕ್ಕಾಗಿ ವಿನ್ಯಾಸಗೊಳಿಸಲಾದ ಚಟುವಟಿಕೆಯ ಮೂಲಕ ಶಿಕ್ಷಕರು ಮತ್ತು ವಿದ್ಯಾರ್ಥಿಗಳ ಸಂಬಂಧದ ಮರುನಿರ್ಮಾಣಕ್ಕೆ ಗಮನವನ್ನು ನೀಡುವುದು. ಈ ಮಧ್ಯೆ, ಹಿಂದಿನ ಸಾಧನೆಯನ್ನು ಆಧರಿಸಿ ಮೊದಲನೇ ಹಂತದ ಕೆಲವು ಚಟುವಟಿಕೆಗಳನ್ನು ಮತ್ತೊಮ್ಮೆ ಪರಿಗಣಿಸಿ ಮುಂದಿನ ಹಂತಕ್ಕೆ ಕೊಂಡೊಯ್ಯಬಹುದು. (ಮತ್ತು ಇದು ಅದೇ ಶಾಲೆಯ ವ್ಯಾಪ್ತಿಯಲ್ಲಿ ವ್ಯಾಪಕವಾಗಿ ಬದಲಾಗಬಹುದು).

ಡಬ್ಲ್ಯುಎಚ್ಒ ಹೊರಡಿಸಿರುವ ಶಾಲೆಗಳನ್ನು ಕುರಿತ ಎಫ್ಎಕ್ಯೂ, ಶಿಕ್ಷಣ ಸಚಿವಾಲಯದ ಕೋವಿಡ್ ಕ್ರಿಯಾ ಯೋಜನೆ ಮತ್ತು ಜಾಗತಿಕ ಅಭಿವೃದ್ಧಿಗಾಗಿರುವ ಕೇಂದ್ರದ ಶಾಲೆ ಪುನರಾರಂಭಕ್ಕೆ ಯೋಜನೆ ಸೇರಿದಂತೆ ಕೋವಿಡ್ ಗೆ ಅನುಗುಣವಾದ ಮುನ್ನೆಚ್ಚರಿಕೆಗಳಿಗೆ ಸಂಬಂಧಿಸಿದಂತೆ ಅನೇಕ ಸಂಘಟನೆಗಳು ಪ್ರಕಟಣೆಗಳನ್ನು ತಂದಿವೆ. ಇವುಗಳಲ್ಲಿನ ಮೂರು ಬಹುಮುಖ್ಯ ಅಂಶಗಳೆಂದರೆ:

1. ರೋಗದ ಗುಣಲಕ್ಷಣಗಳ ಬಗ್ಗೆ ಹೆಚ್ಚು ಎಚ್ಚರಿಕೆಯಿಂದ ಇರುವುದು.
2. ಶಿಕ್ಷಕರ ಲಸಿಕೆ ಸ್ಥಿತಿಗತಿ.
3. ಶಾಲಾ ಕಟ್ಟಡದ ಒಳಗಿನ ಎಲ್ಲ ಪ್ರದೇಶಗಳ ಗಾಳಿ-ಬೆಳಕಿನ ವ್ಯವಸ್ಥೆ.

ಈ ಹಂತದಲ್ಲಿ ನಾವು ಹೆಚ್ಚು ಹೆಚ್ಚು ಹೊರಾಂಗಣದಲ್ಲಿ ಕಾರ್ಯನಿರ್ವಹಿಸಿದರೆ ಉತ್ತಮ. ಸಾಧ್ಯವಾದಷ್ಟು ವಿಶಾಲವಾದ ಮರದ ನೆರಳಿನಲ್ಲಿ ಅಥವಾ ಶಾಲಾ ಆವರಣದ ವ್ಯಾಪ್ತಿಯಲ್ಲಿಯೇ ಇರುವ ತೆರೆದ ಪ್ರದೇಶದಲ್ಲಿ ಶಿಕ್ಷಣವನ್ನು ಪುನರಾರಂಭ ಮಾಡಬೇಕು. ಇನ್ನೊಂದು ಬಹುಮುಖ್ಯ ಅಂಶ ಏನೆಂದರೆ ಶಾಲೆಗೆ ಮರಳುವುದು ಶಿಕ್ಷಕರು, ವಿದ್ಯಾರ್ಥಿಗಳು ಮತ್ತು ಪಾಲಕರು ಸೇರಿದಂತೆ ಎಲ್ಲ ಹಕ್ಕುದಾರರಿಗೂ ನೆಮ್ಮದಿಯನ್ನು ತರುವಂತಿರಬೇಕು. ಪಾಲಕರು ಮತ್ತು ಸಮುದಾಯ ಈ ಏರ್ಪಾಡಿನ ಭಾಗವಾಗಿರಬೇಕು. ಇದರಿಂದ ಶಾಲೆಯಲ್ಲಿ

ಕೋವಿಡ್-19 ನಿಂದಾಗಿ ಎಲ್ಲಾ ರೀತಿಯ ಮುನ್ನೆಚ್ಚರಿಕೆಗಳನ್ನು ಕೈಗೊಳ್ಳಲಾಗಿದೆ ಎಂಬುದು ಅವರಿಗೆ ಮನವರಿಕೆಯಾಗುತ್ತದೆ.

ಕಲಿಕಾ ಚಟುವಟಿಕೆಗಳತ್ತ ಮರಳಲು ಮಗುವು ಶೈಕ್ಷಣಿಕವಾಗಿ ಮತ್ತು ಭಾವನಾತ್ಮಕವಾಗಿ ಸಂತೃಪ್ತರಾಗಿರಬೇಕು. ಎಲ್ಲಾ ಆಯಾಮಗಳಲ್ಲಿ ಮಕ್ಕಳು ಶಾಲೆಗೆ ಮರಳುತ್ತಿರುವ ಬಗ್ಗೆ, ಗೆಳೆಯರನ್ನು, ಗೆಳತಿಯರನ್ನು ಭೇಟಿ ಮಾಡುವ ಬಗ್ಗೆ ಮತ್ತು ಶಾಲಾ ಆವರಣದಲ್ಲಿ ಆಟವಾಡುವ ಬಗ್ಗೆ ಹೆಚ್ಚು ತೃಪ್ತಿ ಇರಬೇಕು. ಆದರೆ ಕಲಿಕಾ ಚಟುವಟಿಕೆಗಳು ವಿಭಿನ್ನ ಸ್ವರೂಪದ್ದಾಗಿವೆ ಮತ್ತು ಅವು ಹಂತ ಹಂತವಾಗಿ ಮರಳಬೇಕಾಗುತ್ತದೆ. ಈ ಪುನರಾಗಮನದಲ್ಲಿ ನೆಮ್ಮದಿಯನ್ನು ಕಾಣಲು ಒಂದು ತಿಂಗಳ ಕಾಲಾವಕಾಶ ಬೇಕಾದರೂ ಅದನ್ನು ಉತ್ತಮ ಅವಧಿ ಎಂದೆ ಪರಿಗಣಿಸಬೇಕಾಗುತ್ತದೆ. ಅದಾದ ಬಳಿಕ ಪ್ರತಿಯೊಂದು ಮಗುವಿನ ಕಲಿಕಾ ಮಟ್ಟವನ್ನು ಗುರುತಿಸಲು ಬೇಸ್-ಲೈನ್ ಚಟುವಟಿಕೆಗಳನ್ನು ಆರಂಭಿಸಬಹುದು. ಆನಂತರ ಮೊದಲ ಹಂತದಲ್ಲಿ ಅಭಿವೃದ್ಧಿಪಡಿಸಲಾದ ಹೊಸ ಕಾರ್ಡ್-ಆಧಾರಿತ ಪಠ್ಯಕ್ರಮವನ್ನು ಕ್ರಮೇಣ ಪರಿಚಯಿಸಬಹುದು.

***ಹಂತ-3***

ಕಲಿಕಾ ಫಲಿತಾಂಶಗಳ ಮೇಲೆ ಮತ್ತೆ ಗಮನವನ್ನು ನೀಡುವುದರೊಂದಿಗೆ ಮೂರನೇ ಹಂತ ಆರಂಭವಾಗುತ್ತದೆ. ಈ ಹಂತದಲ್ಲಿ ವಿದ್ಯಾರ್ಥಿಗಳನ್ನು ಒಳಗೊಳ್ಳುವ ಸ್ಪಷ್ಟ ಯೋಜನೆಯನ್ನು ಹೊಂದಿರುವ ಪಠ್ಯಕ್ರಮವನ್ನು ವಿನ್ಯಾಸಗೊಳಿಸುವುದು. ಇಲ್ಲಿ ವಿದ್ಯಾರ್ಥಿಗಳು ಬಹುಕಲಿಕಾ ಹಂತದಲ್ಲಿ ಇದ್ದರೂ ಕೂಡ ಅವರನ್ನು ಅತ್ಯಂತ ಎಚ್ಚರಿಕೆಯಿಂದ ಆಯ್ಕೆ ಮಾಡಲಾದ ಸರಣಿ ರೂಪದ ಕಲಿಕಾ ಚಟುವಟಿಕೆಗಳ ಮೂಲಕ ಅಪೇಕ್ಷಿತ ಹಂತಕ್ಕೆ ತರುವುದು ಈ ಹಂತದ ಮುಖ್ಯ ಉದ್ದೇಶ. ಇಲ್ಲಿ ಬೇಕಾದ ಕಾರ್ಡ್ ಗಳು ಮತ್ತು ಇತರ ಅಗತ್ಯವಿರುವ ಸಾಮಗ್ರಿಗಳನ್ನು ಮುಂಚಿತವಾಗಿ ವಿನ್ಯಾಸಗೊಳಿಸುವುದು ಹಾಗೂ ಎಲ್ಲಕ್ಕಿಂತ ಮುಂಚಿತವಾಗಿ ಶಿಕ್ಷಕರು ಸರ್ವಸನ್ನದ್ಧರಾಗಿ ಇರುವಂತೆ ಮಾಡುವುದರಲ್ಲಿ ಈ ಹಂತದ ಯಶಸ್ಸು ಅಡಗಿದೆ. ಇಲ್ಲಿ ನಾನು ಕಾರ್ಡ್ ಗಳ ಬಗ್ಗೆ ಪ್ರಸ್ತಾಪ ಮಾಡಿದ್ದೇನೆ; ಯಾಕೆಂದರೆ ತೀರಾ ವ್ಯತ್ಯಯವಾಗಬಲ್ಲ ಪರಿಸ್ಥಿತಿಯಲ್ಲಿ ಕಾರ್ಡ್ ಆಧಾರಿತ ಬಹು-ವರ್ಗ, ಬಹು-ಹಂತ, (ಎಂಜಿಎಂಎಲ್) ವಿಧಾನವು ಅತ್ಯಂತ ಅಪೇಕ್ಷಣೀಯವಾದುದಾಗಿದೆ. ಆದರೆ ಈ ವಿಷಯದಲ್ಲಿ ನಾನಾ ರಾಜ್ಯಗಳಲ್ಲಿ ವಿಭಿನ್ನತೆ ಇರಬಹುದು. ಕರ್ನಾಟಕದಲ್ಲಿ ಈಗಾಗಲೇ ಈ ವಿಧಾನವನ್ನು ಜಾರಿಗೆ ತಂದಿರುವುದರಿಂದ ಅಲ್ಲಿ ಇದು ಸುಲಭವಾಗಬಹುದು. ಆದರೆ ಈ ವಿಧಾನವನ್ನು ಅನುಷ್ಠಾನಕ್ಕೆ ತರದಿರುವ ರಾಜ್ಯಗಳಲ್ಲಿ ಸಲ್ಪ ಕಷ್ಟವಾಗುತ್ತದೆ.

ವಯಸ್ಸಿಗೆ ಸೂಕ್ತವಾದ ಕಲಿಕಾ ಫಲಿತಾಂಶಗಳನ್ನು ಸಾಧಿಸಲು ಹೊಸ (ಮಾರ್ಪಡಿಸಲಾದ) ಪಠ್ಯಕ್ರಮವನ್ನು ಅನುಸರಿಸುವುದು ಈ ಹಂತದ ಮುಖ್ಯ ಯೋಚನೆಯಾಗಿದೆ. ಇದು ಸಾಧ್ಯವಾದ ಬಳಿಕ ಕಳೆದ ಎರಡು ವರ್ಷಗಳ ಅವಧಿಯಲ್ಲಿನ ಕಲಿಕೆಯನ್ನು ಆಧರಿಸಿ ಕೆಲವು ಮಾರ್ಪಾಡುಗಳೊಂದಿಗೆ ವಾಡಿಕೆಯ ಪಠ್ಯಕ್ರಮವನ್ನು ಅನುಸರಿಸಬಹುದಾಗಿದೆ. ಇವೆಲ್ಲ ಕಲಿಕೆಗಳನ್ನು ಭವಿಷ್ಯದಲ್ಲಿ ಈ ಹಂತದ ಶಾಲಾ ಶಿಕ್ಷಣದಲ್ಲಿ ಅಳವಡಿಸಿಕೊಳ್ಳಬಹುದು:

- ಕಲಿಕಾ ಫಲಿತಾಂಶಗಳನ್ನು ಆಧರಿಸಿದ ಚಟುವಟಿಕೆಗಳ ಕಡೆಗೆ ಶಿಕ್ಷಕರು ಗಮನವನ್ನು ಹರಿಸಬಹುದು. ಕೆಲವು ಚಟುವಟಿಕೆಗಳ ಮೇಲಿನ ಸಮಯವನ್ನು ಕಡಿತಗೊಳಿಸಿ ಇನ್ನೂ ಮುಖ್ಯವಾದವುಗಳಿಗೆ ಹೆಚ್ಚಿನ ಸಮಯವನ್ನು ನೀಡುವ ಅವಕಾಶ ಯಾವತ್ತೂ ಇರುತ್ತದೆ.
- ಮನೆಯ ವಾತಾವರಣವು ಶಾಲಾ ಕಲಿಕೆಗೆ ಪೂರಕವಾಗಿರಬಹುದು. ಕೋವಿಡ್ ನಂತರದ ಅವಧಿಯಲ್ಲಿ ಸ್ಥಳೀಯ ಸ್ವಯಂಸೇವಕರು ಮಕ್ಕಳ ಗುಂಪುಗಳೊಂದಿಗೆ ಕಾರ್ಯನಿರ್ವಹಿಸಬಹುದು. ಉದಾಹರಣೆಗೆ: *ಶಿಕ್ಷಾ ಮಿತ್ರಾ.*
- ಈಗ ಪರಿಕಲ್ಪನೆಗಳನ್ನು ತರಗತಿಗಳಲ್ಲಿ ಜಾರಿಗೆ ತರಬಹುದು. ಇದರಿಂದ ನಾವು ಮೊದಲನೇ ಹಂತದ ವರ್ಕ್-ಶೀಟ್ ನಿಂದ ಬಲವರ್ಧನೆ ಮತ್ತು ಅಭ್ಯಾಸ ಇತ್ಯಾದಿಗಳ ಕಡೆಗೆ ಗಮನವನ್ನು ಹರಿಸಬಹುದಾದ ವರ್ಕ್-ಬುಕ್ ಗೆ ಮರಳಬಹುದು.
- ಅಭ್ಯಾಸ ಮತ್ತು ತತ್ ಕ್ಷಣದ ಅಭಿಪ್ರಾಯಗಳನ್ನು ಕಲ್ಪಿಸುವ ಮೂಲಕ ತಂತ್ರಜ್ಞಾನವು ತನ್ನ ಪಾತ್ರವನ್ನು ನಿರ್ವಹಿಸಬಹುದು. ಆದರೆ ಇದಕ್ಕೆ ಅತ್ಯಧಿಕ ಹೂಡಿಕೆ ಮತ್ತು ಆಧುನೀಕರಣದ ಅಗತ್ಯವಿರುತ್ತದೆ. ಆದರೆ, ಶಿಕ್ಷಕರ ತರಬೇತಿ, ದತ್ತಾಂಶಗಳ ಸಂಗ್ರಹ ಮತ್ತು ಶಿಕ್ಷಕರು, ಪಾಲಕರು ಮತ್ತು ಶೈಕ್ಷಣಿಕ ನಿರ್ವಾಹಕರ ನಡುವೆ ತ್ವರಿತವಾದ ಹಾಗೂ ನಿಯಮಿತವಾದ ಸಂಹವನ ನಡೆಸುವಲ್ಲಿ ತಂತ್ರಜ್ಞಾನವು ಬಹುದೊಡ್ಡ ಪಾತ್ರವನ್ನು ನಿರ್ವಹಿಸಬಹುದು. ಇಂತಹ ವಿಚಾರಗಳಲ್ಲಿ ವಾಟ್ಸ್ಯಾಪ್ ಗ್ರೂಪ್ ಗಳು ಕೂಡ ಕೆಲಸ ಮಾಡಬಹುದು.

**ಮುಂದಿನ ಹಾದಿ**

ಕೋವಿಡ್-19 ಪ್ಯಾಂಡಮಿಕ್ ಯಾವುದೇ ಹೊಸ ಸಾಮಾಜಿಕ ವಿದ್ಯಮಾನವನ್ನು ಸೃಷ್ಟಿಸಲಿಲ್ಲ. ಬದಲಾಗಿ ಈಗಾಗಲೇ ಅಸ್ತಿತ್ವದಲ್ಲಿ ಇರುವುದನ್ನೇ ಇನ್ನಷ್ಟು ವಿಸ್ತರಿಸಿತು. ಮಧ್ಯಮ ಮತ್ತು ಮೇಲ್ವರ್ಗದ ಹಿನ್ನೆಲೆಯ ಪಾಲಕರ ಮಕ್ಕಳು ತಮ್ಮ ಶಿಕ್ಷಣವನ್ನು ಮುಂದುವರಿಸಿದರು. ಆದರೂ ಅದು ಅತ್ಯಂತ ಸುಧಾರಿತವಾದುದು. ಸರ್ಕಾರಿ ಶಾಲೆಗಳು ಆರಂಭದ ಹಂತದಲ್ಲಿ ಕಾದು ನೋಡುವ ತಂತ್ರವನ್ನು ಬಳಸಿದವಾದರೂ ಆ ಬಳಿಕ ಕೆಲವು ಉಪಕ್ರಮಗಳನ್ನು ಆರಂಭಿಸಿದವು. ಇದು ಬೇರೆ ಬೇರೆ ರಾಜ್ಯಗಳಿಗೆ ಹೋಲಿಸಿದರೆ ಸಾಕಷ್ಟು ವ್ಯತ್ಯಾಸಗಳಿರುವುದನ್ನು ಕಾಣಬಹುದು.

ಮೇಲೆ ಬಿಂಬಿಸಲಾಗಿರುವ ಕೆಲಸಗಳನ್ನು ಹಂತಹಂತವಾಗಿ ಕಾರ್ಯರೂಪಕ್ಕೆ ತರಬಹುದು. ಅದು ಈಗಿನಿಂದ ಆರಂಭಿಸಿ ಶಾಲೆ ಪುನರಾರಂಭವಾಗುವ ತನಕ ಕೈಗೊಳ್ಳಬಹುದು. ಅಷ್ಟು ಮಾತ್ರವಲ್ಲದೆ ಶಾಲೆಗಳು ಪುನರಾರಂಭವಾದ ನಂತರದಿಂದ ಯಥಾಸ್ಥಿತಿ ನಿರ್ಮಾಣವಾಗುವ ತನಕವೂ ಮುಂದುವರಿಸಲು ಸಾಧ್ಯವಿದೆ. ಭವಿಷ್ಯದಲ್ಲಿ ಅತ್ಯಗತ್ಯವಾಗಿರುವ ಸಂಗತಿ ಏನೆಂದರೆ *ಶಿಕ್ಷಣದಲ್ಲಿ ತಂತ್ರಜ್ಞಾನ ಮತ್ತು ನಿರ್ವಹಣೆ ಎರಡನ್ನೂ ಸಕಾರಾತ್ಮಕವಾಗಿ ತೊಡಗಿಸಿಕೊಳ್ಳುವುದು.* ಪರಿಹಾರಗಳ ಕಡೆಗೆ ಹೆಚ್ಚು ಗಮನವನ್ನು ಹರಿಸುವಂತಹ ಶಿಕ್ಷಣದ

ಉತ್ತಮ ನಿರ್ವಹಣೆ ನಮಗೆ ಅಗತ್ಯವಿದೆ. ಅಂತಹ ಪರಿಹಾರಗಳು ಪರಿಪೂರ್ಣವಾಗಿಲ್ಲದೇ ಇರಬಹುದು, ಆದರೆ ಮಕ್ಕಳ ಕಲಿಕೆಯ ಕಡೆಗೆ ಉತ್ತಮವಾಗಿ ಕೆಲಸ ಮಾಡುವಂತಿರಬೇಕು.

ನಿರ್ವಹಣೆ ಎನ್ನುವುದು ತೀರಾ ಸಂದರ್ಭಕ್ಕೆ ತಕ್ಕಂತೆ ನಿರ್ವಹಿಸುವ ಕಲೆ. ಅದು ಯಾವತ್ತೂ ಫಲಿತಾಂಶಗಳ ಮೇಲೆ ಹೆಚ್ಚು ಗಮನ ಕೇಂದ್ರೀಕರಿಸುತ್ತದೆ. ವ್ಯಾಪಾರದಲ್ಲಿ ನಮಗೆ ಸಮಾಜ ಮತ್ತು ಸಹಜ ಪರಿಸರದ ಕಡೆಗೆ ಇರುವ ಅದರ ಸಮತೋಲಿತ ನಿಲುವಿನ ನಿರ್ವಹಣೆಯ ಅಗತ್ಯವಿರುತ್ತದೆ. ಆದರೆ ಶಿಕ್ಷಣದಲ್ಲಿ ನಮಗೆ ಭೂಮಿ, ಕಟ್ಟಡ ಮತ್ತು ಸೌಲಭ್ಯಗಳು, ಜನ ಮತ್ತು ಕಲಿಕಾ ಪ್ರಕ್ರಿಯೆಯ ಉತ್ತಮ ನಿರ್ವಹಣೆ ಬೇಕಾಗಿರುತ್ತದೆ. ವಿದ್ಯಾರ್ಥಿಗಳ ಮೌಲ್ಯಮಾಪನ ಮತ್ತು ಸರ್ಕಾರಿ ಶಾಲೆಗಳಿಂದ ಮಕ್ಕಳನ್ನು ನಿರಂತರವಾಗಿ ಬರಿದುಮಾಡುವ ಕಾರ್ಯವನ್ನು ಮುಂದುವರಿಸುವ ವಿಚಾರದಲ್ಲಿ ಬರುವ ಅಭಿಪ್ರಾಯಗಳನ್ನು ನಾವು ಸಾಧ್ಯವಾದಷ್ಟು ಉತ್ತಮವಾಗಿ ಬಳಸಿಕೊಳ್ಳುವ ಅಗತ್ಯವಿದೆ. ಅದೇ ರೀತಿ ತಂತ್ರಜ್ಞಾನದ ಕಡೆಗೂ ನಾವು ಸಮಾನವಾದ ಮತ್ತು ಸಮತೋಲಿತವಾದ ನಿಲುವನ್ನು ಹೊಂದುವ ಅಗತ್ಯವಿದೆ. ಪ್ರಾಥಮಿಕ ತರಗತಿಗಳಿಗೆ ನಾವು ವಿದ್ಯಾರ್ಥಿಯೇತರ ತಂತ್ರಜ್ಞಾನಗಳನ್ನು ಎದುರಿಸುವ ಕಡೆಗೆ ಗಮನ ಹರಿಸಬಹುದು. ಅವುಗಳೆಂದರೆ:

- *ದೀಕ್ಷಾ*ದಂತಹ ಪೋರ್ಟಲ್ ಗಳ ಮೂಲಕ ಎಲ್ಲ ಭಾಷೆಗಳಲ್ಲಿ ಶಿಕ್ಷಕರಿಗೆ ಸಮೃದ್ಧವಾದ ಅಧ್ಯಾಪನಶಾಸ್ತ್ರ ವಿಷಯ. (ಬ್ಲಾಕ್ ಮತ್ತು ಜಿಲ್ಲಾ ಮಟ್ಟಗಳೆರಡರಲ್ಲೂ ಸ್ಥಳೀಯ ಕಾರ್ಯಾಗಾರಗಳಿಗೆ ಬಳಸಲು)
- ಶಿಕ್ಷಕರು, ಪಾಲಕರು ಮತ್ತು ಶೈಕ್ಷಣಿಕ ನಿರ್ವಾಹಕರು ಸೇರಿದಂತೆ ಸಂಬಂಧಪಟ್ಟ ಎಲ್ಲರ ನಡುವೆ ತ್ವರಿತವಾದ ಮತ್ತು ನಿಯಮಿತವಾದ ಸಂಪರ್ಕ ವ್ಯವಸ್ಥೆ. ಇದನ್ನು ಗ್ರಾಹಕರಿಗೆ ತಕ್ಕುದಾದ ಮೆಸೆಂಜರ್ ತಂತ್ರಾಂಶದ ಮೂಲಕ ಏರ್ಪಾಡು ಮಾಡುವುದು, ಇದು ಸರ್ಕಾರದ ದತ್ತಾಂಶ ಸಂಗ್ರಹ ಅಗತ್ಯಗಳನ್ನು ಕೂಡ ನಿರ್ವಹಿಸುತ್ತದೆ.
- ರೂಪಾತ್ಮಕ ಮೌಲ್ಯಮಾಪನ ದತ್ತಾಂಶ ವಿಶ್ಲೇಷಣೆ ಮತ್ತು ಶಿಕ್ಷಕರಿಗೆ ಮರಳಿ ಒದಗಿಸಿರುವುದು ಮುಂಬರುವ ಕಲಿಕಾ ಚಟುವಟಿಕೆಗಳಲ್ಲಿ ಮಾಡಬಹುದಾದ ಮಾರ್ಪಾಡುಗಳ ಸೂಚನೆಯಾಗಿದೆ.

**ಅನುಬಂಧಗಳು**

i. ಪ್ಯಾಂಡಮಿಕ್ ಅವಧಿಯಲ್ಲಿ ಕಲಿಕೆಯ ನಷ್ಟ, ಫೆಬ್ರುವರಿ 2021, ಅಜೀಂ ಪ್ರೇಂಜಿ ಫೌಂಡೇಶನ್ https://tinyurl.com/86jhmf6d

ii. https://www.youtube.com/c/itsvicters/featured

iii. ಕರ್ನಾಟಕದ ನಲಿಕಲಿಯಂತಹ ಕಾರ್ಡ್ ಆಧಾರಿತ ಪಠ್ಯಕ್ರಮವು ಈಗಿನ ವಿದ್ಯಮಾನದಲ್ಲಿ ಅತ್ಯುತ್ತಮ ನಿರ್ವಹಣಾ ಮಾರ್ಗವಾಗಬಹುದು. ಯಾವುದೇ ಹಂತದಲ್ಲಿರುವ ಮಗುವು ಅಲ್ಲಿಂದ ಮುಂದೆ ತನ್ನದೇ ಗತಿಯಲ್ಲಿ ಮುನ್ನಡೆ ಸಾಧಿಸಲು ಮತ್ತು ಅವರು ಪಠ್ಯಪುಸ್ತಕಗಳನ್ನು ಸ್ವಾಧೀನಪಡಿಸಿಕೊಳ್ಳುವ ಹಂತದಿಂದ ಹೆಚ್ಚು ಸಾಮಾನ್ಯವಾದ ಹಂತಕ್ಕೆ ತಲುಪಲು ಕಾರ್ಡ್ ಗಳು ಸಹಾಯವಾಗುತ್ತವೆ.

**ಶ್ರೀಕಾಂತ್ ಶ್ರೀಧರನ್** ಅವರು ಸರಿಸುಮಾರು 12 ವರ್ಷಗಳ ಕಾಲ ಶಾಲಾ ಶಿಕ್ಷಣ ಸುಧಾರಣೆಯ ಕ್ಷೇತ್ರದಲ್ಲಿ ಕೆಲಸ ಮಾಡಿದ್ದಾರೆ. ಶಿಕ್ಷಣದಲ್ಲಿ ನಾಗರಿಕ ಸೇವಾ ಸಂಘಟನೆಗಳ ಜಾಲವನ್ನು ವೃದ್ಧಿಸುವ ಮತ್ತು ಪೋಷಿಸುವುದು

ಸೇರಿದಂತೆ ಅನೇಕ ಹಂತಗಳಲ್ಲಿ ಅವರು ಕೆಲಸ ಮಾಡಿದ್ದಾರೆ ಮತ್ತು ವ್ಯವಸ್ಥಿತವಾದ ಬದಲಾವಣೆಗಳನ್ನು ತರಲು ಜಿಲ್ಲಾ ಮಟ್ಟದ ತಂಡದ ಜೊತೆಗೆ ನಿಕಟವಾಗಿ ಕೆಲಸ ಮಾಡಿದ್ದಾರೆ. ಶ್ರೀಕಾಂತ್ ಅವರು ಆಡಳಿತ ನಿರ್ವಹಣೆ ಮತ್ತು ತಂತ್ರಜ್ಞಾನದ ಶೈಕ್ಷಣಿಕ ಹಿನ್ನೆಲೆ ಮತ್ತು ಅನುಭವವನ್ನು ಹೊಂದಿದ್ದಾರೆ. ವಿಚಾರಣೆಯಲ್ಲಿ ದಾರ್ಶನಿಕ ಮನಸ್ಥಿತಿ ಮತ್ತು ಕಾರ್ಯನಿರ್ವಹಣೆಗೆ ಆರಂಭಿಕ ಮನಸ್ಥಿತಿಯನ್ನು ಕಾಯ್ದುಕೊಳ್ಳಬೇಕು ಎಂಬುದು ಶ್ರೀಕಾಂತ್ ಅವರ ನಂಬಿಕೆ. ಇವರನ್ನು sreekanth.sreedharan@gmail.com ಇಮೇಲ್ ಐಡಿಯಲ್ಲಿ ಸಂಪರ್ಕಿಸಬಹುದು.

ಅನುವಾದ:

ಪರಿಶೀಲನೆ: ಲತ ಕೆ.ಸಿ.